ಕಲ್ಲನಗೌಡ ಶಿಪ್ಪನಗೌಡ ಪಾಟೀಲ*

# ನಾಗೇಂದ್ರಗಡದ ಕೋಟೆಯ ಅವಶೇಷಗಳು

---

ನಾಗೇಂದ್ರಗಡವು ಧಾರವಾಡ ಜಿಲ್ಲೆಯ ರೋಣ ತಾಲೂಕಿನ ಚಿಕ್ಕ ಗ್ರಾಮವಾಗಿದ್ದು ಇದು ರೋಣದಿಂದ ಪೂರ್ವಕ್ಕೆ ಮುವತ್ತು ಕಿಲೋಮೀಟರ ಅಂತರದಲ್ಲಿ ಕಳಕ ಮಲ್ಲೇಶ್ವರ ಗುಡ್ಡಕ್ಕೆ ಹೊಂದಿಕೊಂಡು ಬಿಳಿ ಗೋದಿ ಬಣ್ಣದ ಕಲ್ಲಿನಿಂದ ತುಂಬಿದೆ. ಊರಿಗೆ ಹೊಂದಿಕೊಂಡಂತೆ ಚಿಕ್ಕ ಗುಡ್ಡದ ಮೇಲೆ ಕೋಟೆ ಇದೆ. ಗುಡ್ಡದ ಮೇಲ್ಗಡೆ ವಿಶಾಲವಾದ ಬಯಲು ಇದೆ. ಪುರಾತನ ನಾಗೇಂದ್ರನ ಮೂರ್ತಿ ಇದ್ದು ವೇದ ಕಾಲದಲ್ಲಿ ನಾಗ ಅಗ್ನಿ ಮುನಿ ತಪಸ್ಸು ಮಾಡಿದ. ಹಾಗೂ ಸಹಸ್ರ ಸಿದ್ಧ ಪುರುಷರಿಗೆ ಬೋಜನ ಮಾಡಿಸಿದ ಪುಣ್ಯ ಕ್ಷೇತ್ರವಿದೆಂದು ಪ್ರತೀತಿ ಇದೆ.

ನಂತರ ಮರಾಠಾ, ಛತ್ರ ಪತಿ ಶಿವಾಜಿ ದಕ್ಷಿಣ ಮುಖವಾಗಿ ಉತ್ತರ ಕರ್ನಾಟಕಕ್ಕೆ ಬಂದು ಗಜೇಂದ್ರ ಗಡಕ್ಕೆ ದಂಡಿನೊಂದಿಗೆ ಬಂದು ಮುತ್ತಿಗೆ ಹಾಕಿ ತನ್ನ ಸ್ವಾಧೀನ ಪಡಿಸಿಕೊಂಡನು. (ಕ್ರಿ. ಶ. ೧೬೭೪ರಲ್ಲಿ) ಮುಂದೆ ತನಗೆ ಬೇಕಾದ ಅಂತಪುರವನ್ನು ಹಾಗೂ ಗುಪ್ತ ಖಜಾನೆಯನ್ನು ಮಾಡಿಸಲು ಈ ನಾಗಪ್ಪನ ಗುಡ್ಡವನ್ನೆ ಆಯ್ಕೆ ಮಾಡಿದನು. ಹದಿನೈದು ಎಕರೆ ಪೈಲು ಜಾಗೆಯಲ್ಲಿ ಸುತ್ತಲೂ ಇಪ್ಪತ್ತು ಅಡಿ ಎತ್ತರವಾದ ಐದು ಅಡಿ ಅಗಲವಾಗಿ ಕೋಟೆಯ ಗೋಡೆಯನ್ನು ಕಟ್ಟಿ, ಪೂರ್ವಾಭಿಮುಖವಾಗಿ ದ್ವಾರವನ್ನು ಇಡಿಸಿದ. ಒಳಗಡೆ ಕಾವಲುಗಾರರಿಗೆ ಅಂಕಣ ಕಟ್ಟಿಗಳನ್ನು ನಂತರ ಚಿಕ್ಕಕಮಾನು ಆಕಾರವುಳ್ಳ ಪ್ರವೇಶ ದ್ವಾರವನ್ನು ದೊಡ್ಡ ಬುರುಜು (ಹುಡೆ), ಮದ್ದಿನ ಮನೆ ನೀರಿನ ಹೊಂಡದ ಮಧ್ಯ ಭಾಗದಲ್ಲಿ ಗುಪ್ತ ಖಜಾನೆ ; ಅದರ ಮೇಲೆ ದುರ್ಗಾ ಮಾತೆಯ ಗುಡಿಯನ್ನು ಕಟ್ಟಿಸಿದ. ನಾಗಪ್ಪನ ಗುಡಿ ಪಶ್ಚಿಮಕ್ಕೆ ಚಿಕ್ಕ ಗುಪ್ತ ದ್ವಾರವಿದೆ. ಕೋಟೆ ಕಟ್ಟಿದ್ದಕ್ಕಾಗಲಿ ಅಥವಾ ಇತರೆ ವಿವರಗಳಿಗೆ ಸಂಬಂದಿಸಿದಂತೆ ಯಾವ ದಾಖಲೆಗಳೂ ಇಲ್ಲ. ಕೋಟೆಯ ಬಹು ಭಾಗ ಈಗ ಬಿದ್ದು ಹೋಗಿದೆ. ದ್ವಾರದ ಬಾಗಿಲ ಚವುಕಟ್ಟನಲ್ಲಿ ಸೂರ್ಯ ಅರ್ಧ ಚಂದ್ರ ಹಾಗೂ ಮಧ್ಯೆ ಹೂವಿನ ಅಲಂಕಾರವಿದ್ದು ಕೋಟೆಯ ದ್ವಾರ ಭದ್ರವಾಗಿರುತ್ತದೆ. ಕಾಡು ಗಲ್ಲಿನ ಪಾವುಟಿಗೆಗಳು ಇದ್ದು, ಕೋಟೆ ಹೊರ ಭಾಗದಲ್ಲಿ ಮಾರುತಿಯ ಶಿಲಾ ವಿಗ್ರಹವಿದೆ. ದ್ವಾರದ ಮುಂದೆ ದೊಡ್ಡ ಬುರುಜು ಇದೆ. ಇದು ಈಗ ಶಿಥಿಲವಾಗಿದೆ. ಈ ಗುಡ್ಡವು ಮೊದಲು ನಾಗ್ನಿ ಮರಡಿ ಎಂದು ರೂಡಿಯಲ್ಲಿದ್ದು ನಾಗಪ್ಪನ ಗುಡ್ಡವಾಗಿ ಮುಂದೆ ನಾಗೇಂದ್ರಗಢವಾಗಿದ್ದಿರಬೇಕು. ಸಮೀಪದಲ್ಲಿ ಕಾಲ ಕಾಲೇಶ್ವರ ದೇವಸ್ಥಾನವಿದ್ದು ಇಲ್ಲಿ ಕೂಡ ಅನೇಕ ಸಿದ್ಧರ ಗವಿಗಳು ಇವೆ.

ಇತ್ತೀಚೆಗೆ ಜನರು ನಿಧಿ ದೊರೆಯುವುದೆಂಬ ನಂಬಿಕೆಯಿಂದ ಈ ಕೋಟೆಯ ಅನೇಕ ಭಾಗಗಳನ್ನು ಬೀಳಿಸಿರುತ್ತಾರೆ. ಹೀಗಾಗಿ ಈ ಕೋಟೆ ಬಹುಬೇಗ ಶಿಥಿಲಾವಸ್ಥೆಗೆ ಒಳಗಾಗುತ್ತಿದೆ.

---

* ಬೆಳಧಡಿ, ಗದಗ ತಾಲೂಕು, ಧಾರವಾಡ ಜಿಲ್ಲೆ